ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ಶಾಲೆಗಳಲ್ಲಿ ONLINE ಶಿಕ್ಷಣದ ಕುರಿತು

ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು) –

94 (92) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಕರ್ನಾಟಕ ರಾಜ್ಯದಲ್ಲಿ ಪ್ರಸ್ತುತ ಕರೋನ ಮಹಾಮಾರಿ ರೋಗದ ಹಿನ್ನಲೆಯಲ್ಲಿ ಹಲವು ಖಾಸಗಿ ಶಿಕ್ಷಣ ಸಂಸ್ಥೆಗಳು ಶಾಲಾ ಮಕ್ಕಳಿಗೆ ಅಂತರ್ಜಾಲ (Online Teaching) ಶಿಕ್ಷಣ ಒದಗಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಬಂದಿದ್ದಲ್ಲಿ, ಸದರಿ ನೂತನ ಮಾದರಿಯ ಶಿಕ್ಷಣದ ಕುರಿತು ಸರ್ಕಾರದ ಅಭಿಪ್ರಾಯವೇನು; ಮತ್ತು ಸಣ್ಣ ಮಕ್ಕಳ ಮೇಲೆ ಆಗುವ ಪರಿಣಾಮಗಳ ಕುರಿತು ಸರ್ಕಾರ ಚಿಂತಿಸಿದೆಯೇ; (ವಿವರ ನೀಡುವುದು)

(ಇ) ಪ್ರಸ್ತುತ ವರ್ಷದ ಶಾಲೆಯ ವಾರ್ಷಿಕ/ಮಾಸಿಕ ಶುಲ್ಕ (Fees) ಅಂತರ್ಜಾಲದ ಮೂಲಕ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಕಟ್ಟಲು ಕೋವಿಡ್ ಸಂಕಷ್ಟದಲ್ಲಿರುವ ಸಾರ್ವಜನಿಕರನ್ನು ಪೀಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸದರಿ ಶುಲ್ಕ ಕಡಿಮೆ ಮಾಡಲು ಖಾಸಗಿ ಶಾಲೆಗಳಿಗೆ ಸರ್ಕಾರದ ವತಿಯಿಂದ ಯಾವುದಾದರೂ ಮಾರ್ಗದರ್ಶನ ನೀಡಲಾಗಿದೆಯೇ? (ವಿವರ ನೀಡುವುದು)